ಎಂ. ಜಿ. ಮಂಜುನಾಥ*

# ಬೆಂಗಳೂರು ಗ್ರಾಮಾಂತರ ಜಿಲ್ಲೆಯ ನವಶೋಧೀತ ಬೃಹತ್ ಶಿಲಾ ನಿವೇಶನಗಳು

ಬೆಂಗಳೂರು ಗ್ರಾಮಾಂತರ ಜಿಲ್ಲೆಯಲ್ಲಿ ಇತ್ತೀಚೆಗೆ ನಾನು ಪತ್ತೆ ಹಚ್ಚಿದ ಹನ್ನೆರಡು ಬೃಹತ್ ಶಿಲಾಯುಗದ ನಿವೇಶನಗಳ ವಿಚಾರ ನಿಮ್ಮ ಮುಂದೆ ಮಂಡಿಸುತ್ತಿದ್ದೇನೆ.

ಈ ನಿವೇಶನಗಳು ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಮಾಗಡಿ, ನೆಲಮಂಗಲ, ರಾಮನಗರ ತಾಲ್ಲೂಕುಗಳಲ್ಲಿವೆ. ಮಾಗಡಿ ತಾಲ್ಲೂಕಿನಲ್ಲಿ ೧, ನೆಲಮಂಗಲ ತಾಲ್ಲೂಕಿನಲ್ಲಿ ೫, ರಾಮನಗರ ತಾಲ್ಲೂಕಿನಲ್ಲಿ ೬ ನಿವೇಶನಗಳು ಪತ್ತೆಯಾಗಿವೆ.

೧. ಮಾಗಡಿ ತಾಲ್ಲೂಕಿನ ಸೋಲೂರು ಹೋಬಳಿಯ ಬಸವೇನಹಳ್ಳಿಬೆಟ್ಟದ ಹಿಂಭಾಗದಲ್ಲಿ ಕಲ್ಯಾಣಪುರ ಎಂಬ ಗ್ರಾಮದ ವ್ಯಾಪ್ತಿಯಲ್ಲಿ ಒಂದು ನಿವೇಶನ ಪತ್ತೆಯಾಗಿದೆ. ಇಲ್ಲಿ ೩೫ ಹಾದಿಕೋಣೆ ಗೋರಿಗಳಿವೆ. ಇಲ್ಲಿಯ ಬಹುತೇಕ ಗೋರಿಗಳು ಅತ್ಯುತ್ತಮ ಸ್ಥಿತಿಯಲ್ಲಿವೆ. ನಾಲ್ಕು ಗೋರಿಗಳು ನಿಧಿ ಶೋಧಕರ ದಾಳಿಗೆ ಗುರಿಯಾಗಿ ಶಿಥಿಲಾವಸ್ಥೆಯಲ್ಲಿವೆ. ಈ ಗೋರಿಗಳಲ್ಲಿ ಸ್ಟ್ಯಾಂಡಿನಂತೆ ಕಾಲುಗಳುಳ್ಳ ೪ ಕೆಂಪು ಮಡಿಕೆಗಳು, ೧ ಕಬ್ಬಿಣದ ಕತ್ತಿ, ೨ ಕಬ್ಬಿಣದ ಬಾಣಗಳು. ಹಾಗೂ ಕಬ್ಬಿಣದಿಂದಲೇ ಮಾಡಿದ ಒಂದು ಜೊತೆ ಸುಂದರವಾದ ಚಪ್ಪಲಿಗಳು ದೊರೆತಿದ್ದವೆಂದು ಅಲ್ಲಿನ ನಿವಾಸಿಗಳು ಹೇಳಿದರು. ಕಬ್ಬಿಣದ ಚಪ್ಪಲಿಗಳು ಬೃಹತ್ ಶಿಲಾಯುಗದ ಯಾವುದೇ ನಿವೇಶನದಲ್ಲಿ ದೊರೆತ ದಾಖಲೆಗಳಿಲ್ಲ. ಹಾಗಾಗಿ ಈ ನಿವೇಶನ ಹೆಚ್ಚಿನ ಪ್ರಾಮುಖ್ಯತೆ ಪಡೆದಿದೆಯೆಂದು ಹೇಳಬಹುದು.

೨. ನೆಲಮಂಗಲ ತಾಲ್ಲೂಕು ಕಸಬಾ ಹೋಬಳಿಯ ಮೈಲನಹಳ್ಳಿ ಎಂಬ ಗ್ರಾಮದಲ್ಲಿ ಒಂದು ಬೃಹತ್ ಶಿಲಾಯುಗದ ನಿವೇಶನ ಪತ್ತೆಯಾಗಿದೆ. ಈ ನಿವೇಶನದಲ್ಲಿ ೧೦೯ ರಂಧ್ರಕೋಣೆ ಗೋರಿಗಳು ಹಾಗೂ ೧೨ ಹಾದಿ ಕೋಣೆ ಗೋರಿಗಳಿವೆ. ಇವುಗಳಲ್ಲಿ ಹತ್ತಾರು ಗೋರಿಗಳು ಅಗೆಯಲ್ಪಟ್ಟಿವೆ. ಅವುಗಳಲ್ಲಿದ್ದ ಮಡಿಕೆಗಳಲ್ಲಿ ರಾಗಿ ಕಾಳುಗಳು ಹಾಗೂ ಮೂಳೆಗಳು ದೊರೆತವೆಂದು ಅಲ್ಲಿನ ಜನರು ಹೇಳಿದರು.

೩. ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯ ಬಿಲ್ಲಿನಕೋಟೆ ಬಳಿಯಲ್ಲಿರುವ ಆಲದಹಳ್ಳಿ ಬೆಟ್ಟದ ಹಿಂಭಾಗದಲ್ಲಿ ಒಂದು ನಿವೇಶನ ಪತ್ತೆಯಾಗಿದೆ. ಇಲ್ಲಿ ೪೨ ಹಾದಿಕೋಣೆ ಗೋರಿಗಳಿವೆ. ಇವುಗಳಲ್ಲಿ ಕೇವಲ ೧ ಗೋರಿ ಮಾತ್ರ ಹಾಳಾಗಿದೆ. ಈ ಗೋರಿಯೊಳಗಿನ ಮಡಿಕೆಗಳ ಚೂರುಗಳನ್ನು ಸಂಗ್ರಹಿಸಿದ್ದೇನೆ. ಈ ನಿವೇಶನದ ಪಕ್ಕದಲ್ಲಿಯೇ ಇರುವ ಬೆಟ್ಟದಲ್ಲಿ ನಾಲ್ಕು ಗವಿಗಳೂ, ಆರು ಕಲ್ಲಾಸರೆಗಳೂ ಇವೆ. ಇವು ಹಿಂದೆ ಬೃಹತ್ ಶಿಲಾಯುಗದ ಜನರ ವಾಸಕ್ಕೆ ಉಪಯೋಗವಾಗಿರಬಹುದಾದ ಸಾಧ್ಯತೆಗಳಿವೆ.

೪. ಬಿಲ್ಲಿನಕೋಟೆಯ ನಿವೇಶನದ ಪೂರ್ವಕ್ಕೆ ೧ ಮೈಲು ದೂರದಲ್ಲಿರುವ ಮಹಿಮಾಪುರದ ಮಹಿಮರಂಗನ ಬೆಟ್ಟದ ಬಳಿ ೨೬ ರಂಧ್ರಕೋಣೆ ಗೋರಿಗಳಿವೆ. ಒಂದು ಗೋರಿಯು ಶಿಥಿಲವಾಗಿದ್ದು ಉಳಿದೆಲ್ಲವೂ ಅತ್ಯಂತ ಸುಭದ್ರವಾಗಿವೆ.

* ಸಂಶೋಧನ ವಿದ್ಯಾರ್ಥಿ, ಕನ್ನಡ ಅಧ್ಯಯನ ಕೇಂದ್ರ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು-೫೬೦೦೫೬

೫. ನೆಲಮಂಗಲ ತಾಲ್ಲೂಕು ಸೋಂಪುರ ಹೋಬಳಿಯ ಎಲೆಕ್ಯಾತನಹಳ್ಳಿಯಲ್ಲಿನ ನಿವೇಶನದಲ್ಲಿ ೪ ರಂಧ್ರಕೋಣೆ ಗೋರಿಗಳಿವೆ. ಅವರಲ್ಲಿ ಎರಡು ಗೋರಿಗಳನ್ನು ಅಗೆದು ಹಾಳು ಮಾಡಿದ್ದಾರೆ. ಉಳಿದೆರಡು ಸುಸ್ಥಿತಿಯಲ್ಲಿವೆ. ಇಲ್ಲಿ ಇನ್ನೂ ಹತ್ತಾರು ಗೋರಿಗಳಿದ್ದಿರಬಹುದು. ಆದರೆ ಕಾಲಾಂತರದಲ್ಲಿ ಹಾಳಾಗಿರಬಹುದು.

೬. ನೆಲಮಂಗಲ ತಾಲ್ಲೂಕು ಕಸಬಾ ಹೋಬಳಿಯ ಮಹದೇವಪುರದ ಬಳಿ ಇರುವ ಹನುಮಯ್ಯನಪಾಳ್ಯದ ಬಳಿಯಲ್ಲಿ ಎಂಟು ಹಾದಿಕೋಣೆ ಗೋರಿಗಳಿವೆ. ಈ ನಿವೇಶನ ಅತ್ಯಂತ ಪ್ರಮುಖವಾದ ನಿವೇಶನ ಎಂದು ನನ್ನ ಅಭಿಪ್ರಾಯ. ಏಕೆಂದರೆ ಇಲ್ಲಿಯ ಗೋರಿಗಳು ತುಂಬಾ ದೊಡ್ಡ ಗೋರಿಗಳು. ಈ ಗೋರಿಗಳ ಮೇಲ್ಭಾಗದಲ್ಲಿ ಮುಚ್ಚಲಾಗಿರುವ ಕ್ಯಾಪ್‌ಸ್ಟೋನ್‌ಗಳು ೨೦ ಅಡಿ ಉದ್ದ, ೧೫ ಅಡಿ ಅಗಲವಾಗಿವೆ. ಬೃಹತ್ ಶಿಲಾಯುಗದ ಬೇರೆ ಎಲ್ಲ ಕಡೆಯ ಸಮಾಧಿಗಳಿಗಿಂತ ಇವೇ ದೊಡ್ಡವಾಗಿರಬಹುದಾದ ಸಾಧ್ಯತೆಗಳಿವೆ.

೭. ಬೆಂಗಳೂರು ಮೈಸೂರು ಹೆದ್ದಾರಿಯಲ್ಲಿರುವ ರಾಮನಗರ ತಾಲ್ಲೂಕು ಕೂಟಗಲ್ಲು ಹೋಬಳಿಯಲ್ಲಿ ಬೃಹತ್ ಶಿಲಾಯುಗದ ಆರು ನಿವೇಶನಗಳನ್ನು ಗುರುತಿಸಿದ್ದೇನೆ. ಬಸವನಪುರ ಎಂಬ ಹಳ್ಳಿಯ ಬಳಿಯಲ್ಲಿ ೧೦೪ ರಂಧ್ರಕೋಣೆ ಗೋರಿಗಳಿವೆ. ಇವುಗಳಲ್ಲಿ ೪೦ ಹಾಳಾಗಿದ್ದು ಉಳಿದವೆಲ್ಲ ಸುಸ್ಥಿತಿಯಲ್ಲಿವೆ.

೮. ವಡೇರಹಳ್ಳಿ ಎಂಬ ಗ್ರಾಮದ ಹತ್ತಿರವಿರುವ ನಿವೇಶನದಲ್ಲಿ ೧೨೦ ರಂಧ್ರಕೋಣೆ ಗೋರಿಗಳಿವೆ. ಸುಮಾರು ೩೦ ಹಾಳಾಗಿವೆ.

೯. ಗಂಗರಾಜರಹಳ್ಳಿ ಎಂಬ ಗ್ರಾಮದಲ್ಲಿನ ನಿವೇಶನದಲ್ಲಿ ೪೦ ರಂಧ್ರಕೋಣೆ ಗೋರಿಗಳಿವೆ. ಸುಮಾರು ೨೦ ಹಾಳಾಗಿವೆ.

೧೦. ಅರಳೀಮರದ ದೊಡ್ಡಿಯ ನಿವೇಶನದಲ್ಲಿ ೩೪ ಗೋರಿಗಳಿವೆ. ೨೨ ಸಂಪೂರ್ಣ ಹಾಳಾಗಿವೆ.

೧೧. ಕೆಂಜಿಗರಹಳ್ಳಿಯ ನಿವೇಶನದಲ್ಲಿ ೮೦ ಗೋರಿಗಳಿವೆ. ೧೦ ಗೋರಿಗಳು ಹಾಳಾಗಿದ್ದು ಉಳಿದವು ಸುಸ್ಥಿತಿಯಲ್ಲಿವೆ. ಒಂದು ಗೋರಿಯ ಮುಂಭಾಗದ ಚಪ್ಪಡಿ ಹಾಳಾಗಿದ್ದು ಒಳಭಾಗದಲ್ಲಿ ೬ ಅಡಿ ಎತ್ತರ ೬ ಅಡಿ ಅಗಲ ಹಾಗೂ ೧೦ ಅಡಿ ಉದ್ದವಿದೆ.

೧೨. ಕೆಂಜಿಗರಹಳ್ಳಿಗೆ ೧/೨ ಮೈಲಿ ದೂರದಲ್ಲಿ ಇರುವ ಕೆಂಜಿಗರಹಳ್ಳಿಬಯಲು ಎಂದು ಕರೆಯಲ್ಪಡುವ ಒಂದು ಬೆಟ್ಟದ ಮೇಲ್ಭಾಗದಲ್ಲಿನ ಸಮತಟ್ಟಾದ ಪ್ರದೇಶದಲ್ಲಿ ಅತ್ಯಂತ ಆಶ್ಚರ್ಯಕರವಾಗಿ ೪೦ ಗೋರಿಗಳಿವೆ. ಇವುಗಳಲ್ಲಿ ಹಾದಿಕೋಣೆ ಗೋರಿಗಳು ಹಾಗೂ ರಂಧ್ರಕೋಣೆ ಗೋರಿಗಳು ಎರಡೂ ರೀತಿಯವುಗಳಿವೆ. ಬಹುತೇಕ ಎಲ್ಲ ಗೋರಿಗಳೂ ಹಾಳಾಗಿವೆ. ದನಗಾಹಿಗಳು ಹಾಗೂ ನಿಧಿಶೋಧಕರ ಕೈವಾಡದಿಂದ ಇವು ಹಾಳಾಗಿರಬಹುದು. ಸಾಧಾರಣವಾಗಿ ಬೆಟ್ಟದ ಮೇಲೆ ಬೃಹತ್ ಶಿಲಾಯುಗದ ಜನರ ಸಮಾಧಿಗಳು ದೊರೆಯುವುದು ತೀರಾ ಅಪರೂಪ. ನನ್ನ ಗಮನಕ್ಕೆ ಬಂದಂತೆ ಕೊಪ್ಪಳದ ಪಾಲ್ಕಿಗುಂಡು ಬೆಟ್ಟದ ಮೇಲೆ, ಹಾಗೂ ಐಹೊಳೆಯ ಮೇಗುತಿ ಜಿನಾಲಯದ ಹಿಂಭಾಗದಲ್ಲಿ ಬೆಟ್ಟದ ಮೇಲೆ ಈ ರೀತಿಯ ಗೋರಿಗಳಿವೆ. ಕರ್ನಾಟಕದ ಹೊರಭಾಗಗಳಲ್ಲಿ ಬೆಟ್ಟದ ಮೇಲೆ ಬಂಡೆಯಲ್ಲಿ ಕೊರೆದ ಕೋಣೆ ಗೋರಿಗಳು ದೊರೆತಿವೆ. ಆದರೆ ಬೆಟ್ಟದ ಮೇಲೆ ಕಟ್ಟಿದ ಕೋಣೆ ಗೋರಿಗಳು ದೊರೆತಿರುವ ನಿದರ್ಶನಗಳು ತೀರಾ ಕಡಿಮೆ. ಇಲ್ಲಿಯ ನಾಲ್ಕು ಗೋರಿಗಳ ಸುತ್ತಲೂ ಇಟ್ಟಿಗೆ ಗಾತ್ರದ ಕಲ್ಲುಗಳನ್ನು ಎರಡೆರಡು ಗಾಡಿಯಷ್ಟು ರಾಶಿ ಹಾಕಲಾಗಿದೆ. ಅವುಗಳಲ್ಲಿ ಒಂದು ಗೋರಿಯನ್ನು ಕರಡಿಗಳು ವಾಸಸ್ಥಾನವನ್ನಾಗಿಸಿಕೊಂಡಿವೆ. ಈ ಬೆಟ್ಟದ ಪಶ್ಚಿಮ ಭಾಗದಲ್ಲಿ ಹತ್ತಾರು ದೊಡ್ಡ ಗವಿಗಳಿದ್ದು ಎಲ್ಲವೂ ಕರಡಿಗಳಿಗೆ ಆಶ್ರಯತಾಣಗಳಾಗಿವೆ. ಈ ಗವಿಗಳು ಬೃಹತ್ ಶಿಲಾಯುಗದ ಮನುಷ್ಯರ ವಾಸದ ತಾಣಗಳಾಗಿರಬಹುದು.

ರಾಮನಗರ ತಾಲ್ಲೂಕಿನ ಈ ಆರು ನಿವೇಶನಗಳ ಸನಿಹದಲ್ಲಿಯೂ ಹತ್ತಾರು ಗವಿಗಳು ಹಾಗೂ ಇದರ ನಾಲ್ಕಾರು ಪಟ್ಟು ಕಲ್ಲಾಸರೆಗಳೂ ಇವೆ. ಇವು ಆ ಕಾಲದ ಜನರಿಗೆ ನಿವಾಸಗಳಾಗಿ ಬಳಕೆಯಾಗಿರಬಹುದು. ಈ ಎಲ್ಲ ಗವಿಗಳೂ ಹಾಗೂ ಕಲ್ಲಾಸರೆಗಳು ಸಂಪೂರ್ಣವಾಗಿ ಕಾಡಿನಿಂದ ಆವರಿಸಲ್ಪಟ್ಟು ಕರಡಿಗಳ ವಾಸಸ್ಥಳ

ಗಳಾಗಿರುವುದರಿಂದ ಈ ಪ್ರದೇಶದಲ್ಲಿ ಜನರ ಓಡಾಟ ತೀರಾ ಕಡಿಮೆಯಾಗಿದೆ. ಹಾಗಾಗಿ ಈ ನಿವೇಶನಗಳು ಹೆಚ್ಚಿನ ಪ್ರಮಾಣದಲ್ಲಿ ಶೋಧನೆ ಆಗಿಲ್ಲದಿರುವುದರಿಂದ ಇವು ಉತ್ಖನನ ಯೋಗ್ಯವಾಗಿವೆ. ಈ ಪ್ರದೇಶದಲ್ಲಿ ಉತ್ಖನನ ಮಾಡಿದರೆ ಅತ್ಯಂತ ಹೆಚ್ಚಿನ ಮಾಹಿತಿ ದೊರೆಯುವ ಸಾಧ್ಯತೆಗಳಿವೆ. ಈ ನಿಟ್ಟಿನಲ್ಲಿ ನಮ್ಮ ಪುರಾತತ್ವ ಇಲಾಖೆ ಕ್ರಮ ಕೈಗೊಳ್ಳುವುದು ಒಳಿತು.